# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1407
2. ಮಾನ್ಯ ಸದಸ್ಯರ ಹೆಸರು : ಶ್ರೀ ಪ್ರಕಾಶ್.ಕೆ.ರಾಥೋಡ್
3. ಉತ್ತರಿಸಬೇಕಾದ ದಿನಾಂಕ : **23.03.2021**
4. ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿರುವ ಯಾವ ಯಾವ ಸಕ್ಕರೆ ಕಾರ್ಖಾನೆಗಳಿಂದ ಎಷ್ಟು ಸುಗರ್ ಸೆಸ್‌ನ್ನು ಪಡೆಯಲಾಗಿದೆ; (ವಿವರ ಒದಗಿಸುವುದು) | ಕೇಂದ್ರ ಸರ್ಕಾರವು 2016-17ನೇ ಸಾಲಿನಿಂದ ಸರಕು ಮತ್ತು ಸೇವಾ ತೆರಿಗೆಯನ್ನು (GST) ಜಾರಿಗೆ ತಂದ ನಂತರ ರಸ್ತೆಕರ ಯೋಜನೆಯು ರದ್ದಾಗಿರುವುದರಿಂದ ವಾಣಿಜ್ಯ ತೆರಿಗೆ ಇಲಾಖೆಯು ಸಕ್ಕರೆ ಕಾರ್ಖಾನೆಗಳಿಂದ ರಸ್ತೆಕರವನ್ನು ಸಂಗ್ರಹಿಸುತ್ತಿಲ್ಲ. ಅದಕ್ಕೂ ಪೂರ್ವದಲ್ಲಿ ಸಕ್ಕರೆ ಕಾರ್ಖಾನೆಗಳು ನುರಿಸುವ ಪ್ರತಿಟನ್ ಕಬ್ಬಿಗೆ ರೂ.5/- ರಂತೆ ವಾಣಿಜ್ಯ ತೆರಿಗೆ ಇಲಾಖೆಯಿಂದ ರಸ್ತೆಕರ ಸಂಗ್ರಹಿಸಿ ಸರ್ಕಾರಕ್ಕೆ ಪಾವತಿಸಲಾಗುತ್ತಿತ್ತು.<br>ಹಿಂದಿನ ವರ್ಷಗಳಲ್ಲಿ ಅಂದರೆ, 2016-17ನೇ ಸಾಲಿನವರೆಗೆ ಸಂಗ್ರಹಿಸಿರುವ ಮೊತ್ತ ರೂ.62.58 ಕೋಟಿಗಳು ಸರ್ಕಾರದಲ್ಲಿ ಬಾಕಿ ಉಳಿದಿರುತ್ತದೆ. ಸರ್ಕಾರವು ಆಯವ್ಯಯದಲ್ಲಿ ಪ್ರತಿ ವರ್ಷ ಅನುದಾನದ ರೂಪದಲ್ಲಿ ಈ ಮೊತ್ತವನ್ನು ಬಿಡುಗಡೆ ಮಾಡುತ್ತದೆ. |
| (ಆ) | ಸುಗರ್ ಸೆಸ್‌ನಿಂದ ಅಭಿವೃದ್ಧಿ ಪಡಿಸಿರುವ ರಸ್ತೆಗಳಾವುವು? (ವಿವರ ಒದಗಿಸುವುದು). | 2020-21ನೇ ಸಾಲಿನಲ್ಲಿ ಕೋವಿಡ್-19 ಕಾರಣದಿಂದಾಗಿ ಸರ್ಕಾರದಿಂದ ಈ ಯೋಜನೆಗೆ ಯಾವುದೇ ಅನುದಾನ ಬಿಡುಗಡೆಯಾಗಿಲ್ಲದೇ ಇರುವುದರಿಂದ ಈ ಸಾಲಿನಲ್ಲಿ ಶುಗರ್ ಸೆಸ್‌ನಿಂದ ಯಾವುದೇ ರಸ್ತೆಗಳನ್ನು ಅಭಿವೃದ್ಧಿಪಡಿಸಿರುವುದಿಲ್ಲ. |

ಸಿಐ 28 ಎಸ್‌ಜಿಎಫ್ 2021

(ಎನ್.ನಾಗರಾಜು.ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು